# ಸರ್ಕಾರದೊಂದಿಗೆ ಸಹಭಾಗಿತ್ವ: ಶ್ರವಣದೋಷವುಳ್ಳ ಮಕ್ಕಳಿಗೆ ಕಾರ್ಯಸಾಧ್ಯ ವಿಶೇಷ ಶೈಕ್ಷಣಿಕ ಗುರಿಗಳ ಸಾಧನೆ: ಅಸ್ಸಾಮ್ ರಾಜ್ಯದಿಂದ ನಿದರ್ಶನವೊಂದರ ಪರಿಶೀಲನೆ

ಬೃಂದಾ ಕೃಷ್ಣ



ಮಬ್ಬು-ಮಬ್ಬಾಗಿರುವ ವಿಷಯಗಳನ್ನು,
ಸುಲಭವಾಗಿ ವಿವರಿಸಲಾಗದ ವಿಷಯಗಳನ್ನು,
ಬಹುತೇಕ ತಪ್ಪುಗಳಿಗೆ ಎಡೆಮಾಡಿಕೊಡುವ ವಿಷಯಗಳನ್ನು,
ಕಾರಣಗಳನ್ನು ಅರಿಯಲಾಗದ ವಿಷಯಗಳನ್ನು,
ನಾವು ಒಪ್ಪಿಕೊಂಡು ಬದುಕಬೇಕಿರುವ ವಿಷಯಗಳನ್ನು
ಕುರಿತು ಧೀರರು ಮಾತ್ರವೇ ಯೋಚಿಸಬಲ್ಲರು.
ಆದ್ದರಿಂದ, ಧೀರರಷ್ಟೇ ಭಿನ್ನವಾಗಿರುವುದನ್ನು ಅಳುಕದೇ ಎದುರಿಸಬಲ್ಲರು.

**ರಿಚರ್ಡ್ ಹೆಚ್.ಹಂಗರ್ಫೋರ್ಡ್**
(Richard H Hungerford)

## ಪರಿಚಯ

ವಿಕಲಾಂಗ ವ್ಯಕ್ತಿಯ ಜೀವನ, ಅಥವಾ ತಾನು ಹಾರೈಸುತ್ತಿದ್ದ ಕುಂದು ಕೊರತೆಗಳಿಲ್ಲದ ಮಗುವಿಗೆ ಜನ್ಮವೀಯದೇ, ವಿಕಲಾಂಗ ಮಗುವಿಗೆ ಜನ್ಮವೀಯುವ ತಾಯಿ, ಈ ಎರಡೂ, ವಾಸ್ತವವಾಗಿ, ಅರಿಯಲು ಬಾರದ ಸತ್ಯಗಳಾಗಿವೆ ಎಂಬುದನ್ನು ಕುರಿತಾಗಿ ನನ್ನ ಅಂಗೀಕಾರ ಹಾಗೂ ಅರಿವಿನ ಮಟ್ಟಗಳನ್ನು ಸದಾ ಪ್ರಶ್ನಿಸುವುದೇ ವೈಕಲ್ಯದ ಕ್ಷೇತ್ರದಲ್ಲಿ ಜಗತ್ತಿನ ಹಲವು ಭಾಗಗಳಲ್ಲಿ ವೃತ್ತಿಪರಳಾಗಿ ಕಾರ್ಯನಿರತವಾಗಿರುವ ನಾನು ಸದಾ ಎದುರಿಸುವ ಅತಿ ದೊಡ್ಡ ಸವಾಲಾಗಿದೆ. ನನಗೆ ವಯಸ್ಸಾಗಿ 'ಜ್ಞಾನ ಮತ್ತು ಪರಿಣಿತಿ' ಪಡೆದ 'ಅನುಭವ'ದ ವರ್ಷಗಳು ಹೆಚ್ಚಾಗಿದ್ದರೂ ನನಗೆ ನಿಜಕ್ಕೂ ತಿಳಿದಿರುವುದು ಅದೆಷ್ಟು ಅಲ್ಪ, ನನ್ನಲ್ಲಿನ ವೃತ್ತಿಪರ ವ್ಯಕ್ತಿಯು ಅದೆಷ್ಟು ಬೇಗ ತೀರ್ಮಾನಗಳಿಗೆ ಸಾರಿ ಒಳ್ಳೆಯ ಹಾಗೂ ಕೆಟ್ಟ ನಡವಳಿಕೆಗಳ ಬಗ್ಗೆ ವ್ಯಕ್ತಿನಿಷ್ಠ ಪೂರ್ವಗ್ರಹದ ನಿರ್ಣಯಗಳನ್ನು ಮಾಡುತ್ತದೆ, ಅದೆಷ್ಟು ಸುಲಭವಾಗಿ ನಮಲ್ಲಿ ಹಲವು ಬಗೆಯ ಉತ್ತರಗಳಿವೆ ಎಂದು ಬಗೆದು, ನಾವೇ ಶ್ರೇಷ್ಠ ಎಂಬ ಭಾವನೆಗೆ ಬಲಿಯಾಗುತ್ತೇವೆ ಎಂಬುದರ ಅರಿವು ನನಗೆ ಹೆಚ್ಚಾಗಿದೆ.

ಈ ಸಿದ್ಧಾಂತ ಹಾಗೂ ಚಿಂತನಾಸರಣಿಯು ನನ್ನ ಎಲ್ಲಾ ಕಾರ್ಯವನ್ನೂ ಪ್ರಭಾವಿಸಿದೆ, 'ವಾಣಿ' (VAANI) ಸಂಸ್ಥೆಯಲ್ಲಿ ನಮ್ಮ ಕೆಲಸವನ್ನು ನೋಡುವ ಧೋರಣೆಯನ್ನು ಪ್ರಭಾವಿಸಿದೆ. ಓರ್ವ ಶ್ರವಣದೋಷವಿರುವ ಮಗುವಿನೊಂದಿಗೆ, ಪೋಷಕರೊಂದಿಗೆ, ಸರ್ಕಾರೇತರ ಸಂಸ್ಥೆಯೊಂದಿಗೆ, ಅಥವಾ ಸರ್ಕಾರದೊಂದಿಗೆ ಸಹಭಾಗಿತ್ವವನ್ನು ಪರಿಗಣಿಸುವಾಗ, ನಾವು ಯಾವುದೇ ರೀತಿಯ ಸಂಬಂಧವನ್ನು ಕಟ್ಟಿಕೊಳ್ಳಲು ಮುಂದಾಗುವ ಮುನ್ನ, ನಮ್ಮಲ್ಲಿ ಆಲಿಸುವ, ವಿಶ್ವಾಸ ಸಂಪಾದಿಸುವ, ಪರಸ್ಪರರ ದೃಷ್ಟಿಕೋನಗಳನ್ನು ಅರಿಯುವ ಅಗತ್ಯವಿದೆ ಎಂಬ ನಂಬಿಕೆ ಮನೆಮಾಡಿರಬೇಕು. ಇದೇ ನಮ್ಮ ಬಹುಪಾಲು ಕಾರ್ಯಗಳನ್ನೂ ಸಾಫಲ್ಯದೆಡೆಗೆ ನಡೆಸಿರುವುದು, ಕಾರ್ಯಸಾಧ್ಯವಾಗಿಸಿರುವುದು ಎಂದು ಹೆಮ್ಮೆಯಿಂದ ಹೇಳುತ್ತೇನೆ. ಆಗ ಮಾತ್ರ ಅದು ನಿಜಕ್ಕೂ ಅಗತ್ಯ ಆಧಾರಿತದ್ದಾಗಿರುತ್ತದೆ.

ಅಸ್ಸಾಂ ಸರಕಾರದ ಜತೆಗಿನ ಸಹಭಾಗಿತ್ವದ ನಮ್ಮ ಕಾರ್ಯಕ್ರಮಕ್ಕೂ ಇದಕ್ಕೂ ಏನು ಸಂಬಂಧವೆಂದು ನೀವು ಕೇಳಬಹುದು. ಈ ಸಹಭಾಗಿತ್ವವು ಸಾಧಿಸಿದ ಯಶಸ್ಸಿಗೆ ಆಲಿಸುವ ಮತ್ತು ಗೌರವಿಸುವ ನಮ್ಮ ಪ್ರಜ್ಞಾಪೂರ್ವಕ ಮನೋಭಾವವೂ ಕಾರಣವೆಂದು ನಾನು ಹೇಳುತ್ತೇನೆ. ಹಲವು ವರ್ಷಗಳಿಂದ ನಮ್ಮೊಡನೆ ಕಾರ್ಯನಿರತರಾಗಿರುವ ಇಲಾಖೆಗಳಿಗೆ ನಾವು ಒಟ್ಟಾಗಿ ಮಾಡುತ್ತಿರುವ ಕೆಲಸದ ಬಗ್ಗೆ ಅದೆಷ್ಟು ಮನವರಿಕೆಯಾಗಿದೆ ಎಂದರೆ, ಅವರು ನಮ್ಮೊಂದಿಗೆ ಈಗ ಒಪ್ಪಂದದ ಒಡಂಬಡಿಕೆಯನ್ನು (MoU) ಸಹಿಮಾಡಲು ಮುಂದಾಗಿದ್ದು, ತನ್ಮೂಲಕ, ಅವರು ತಮ್ಮಷ್ಟಕ್ಕೆ ಅಭಿವೃದ್ಧಿಗೊಳಿಸುವ ಕಾರ್ಯಕ್ರಮಗಳಿಗೆ ನಾವು ಅಗತ್ಯವಿರುವ ತಾಂತ್ರಿಕ ಮಾಹಿತಿಯನ್ನಷ್ಟೇ ನೀಡುತ್ತೇವೆ.

## ಹಿನ್ನೆಲೆ

'ವಾಣಿ' ಎಂಬ ಕಿವುಡು ಮಕ್ಕಳ ಪ್ರತಿಷ್ಠಾನವು 2005ರಲ್ಲಿ ಸ್ಥಾಪಿತವಾಯಿತು. ಮಕ್ಕಳ ಕಿವುಡುತನದ ಸಮಸ್ಯೆಗಳಿಗೆ ಸಂಬಂಧಿಸಿದ ವಿಷಯಗಳಿಗೆ ಮಾತ್ರ ಗಮನ ಕೇಂದ್ರೀಕರಿಸುತ್ತಿರುವ ಮೊದಲ ರಾಷ್ಟ್ರೀಯ ಸರ್ಕಾರೇತರ ಸಂಸ್ಥೆ ಅದಾಗಿತ್ತು. 'ವಾಣಿ' ಶ್ರವಣದೋಷವಿರುವ ಮಕ್ಕಳ ಸಾಮಾಜಿಕ, ಭಾವನಾತ್ಮಕ, ಸಂವಹನಾತ್ಮಕ, ಭಾಷಾಭಿವೃದ್ಧ್ಯಾತ್ಮಕ ಹಾಗೂ ಶೈಕ್ಷಣಿಕ ಅಗತ್ಯಗಳಿಗೆ ಸಮಗ್ರಸ್ವರೂಪದ ಸೇವೆಗಳನ್ನು ಒದಗಿಸುತ್ತದೆ. ಶ್ರವಣದೋಷವಿರುವ ತಮ್ಮ ಮಕ್ಕಳನ್ನು ಅರ್ಥಮಾಡಿಕೊಂಡು, ಅವರೊಡನೆ ಸಂವಹನ ಮಾಡುವುದನ್ನು ಕಲಿಯಲು ಕುಟುಂಬಗಳಿಗೆ ಸಂಸ್ಥೆಯು ಪ್ರೋತ್ಸಾಹ ನೀಡುತ್ತದೆ. ಹೀಗೆ ಮಾಡುವ ಮೂಲಕ ಸರ್ಕಾರ ಮತ್ತು ಸೇವಾಸಂಸ್ಥೆಗಳಿಂದ ಈ ಮಕ್ಕಳ ಹಕ್ಕುಗಳನ್ನು ಪಡೆಯುವುದನ್ನೂ ಒಳಗೊಂಡಂತೆ, ಅವರ ಎಲ್ಲಾ ಅಗತ್ಯಗಳನ್ನೂ ಪೂರೈಸುವಲ್ಲಿ ಸಕ್ರಿಯ ಪಾತ್ರ ವಹಿಸುವಂತೆ ಮಾಡುತ್ತದೆ.

ಮಕ್ಕಳ ಕಿವುಡುತನದ ಸಮಸ್ಯೆಗಳ ಸುತ್ತ ನವೆಂಬರ್ 2002ರಲ್ಲಿ ನಡೆಸಿದ ಉಪಯುಕ್ತತೆಯ ಅಧ್ಯಯನವು ಮಾಡಿದ ಶಿಫಾರಸುಗಳು 'ವಾಣಿ'ಯ ಹುಟ್ಟಿಗೆ ಕಾರಣವಾದವು. ಅದೊಂದು ರಾಷ್ಟ್ರೀಯ ಮಟ್ಟದ ಅಧ್ಯಯನವಾಗಿದ್ದು, ಅದನ್ನು ಸಂಪೂರ್ಣವಾಗಿ ಭಾಗೀದಾರಿಕೆಯ ಆಧಾರದ ಮೇಲೆ ನಡೆಸಲಾಯಿತು. ಸಂಶೋಧಕರು ಶ್ರವಣದೋಷ ಪೀಡಿತ ಮಕ್ಕಳ ಕುಟುಂಬಗಳನ್ನು, ಸ್ವತಃ ಮಕ್ಕಳನ್ನು, ಹಾಗೂ ದೇಶಾದಾದ್ಯಂತ ಇರುವ ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳ ವೃತ್ತಿಪರರನ್ನು ಭೇಟಿಯಾದರು. ಶ್ರವಣದೋಷ ಪೀಡಿತರೊಂದಿಗೆ ತೊಡಗಿಸಿಕೊಂಡಿರುವ ಅಥವಾ ಅವರೊಂದಿಗೆ ಸಂಬಂಧ ಹೊಂದಿರುವ (ಪೋಷಕರು ಹಾಗೂ ಶ್ರವಣದೋಷವಿರುವ ತರುಣರು ಮತ್ತು ವಯಸ್ಕರೂ ಸೇರಿದಂತೆ) ಎಲ್ಲರೂ ವ್ಯಕ್ತಪಡಿಸಿದಂತೆ, ಅತ್ಯಧಿಕ ತುರ್ತಿನ ಕೆಲಸವಾಗಬೇಕಿರುವ ಕ್ಷೇತ್ರವು ಶ್ರವಣದೋಷಕ್ಕೆ ಸಂಬಂಧಿಸಿದ ಎಲ್ಲಾ ಮಗ್ಗುಲುಗಳೂ ಒಳಗೊಂಡ ಸಮಗ್ರವಾದ ಶ್ರವಣ ಸಮಸ್ಯೆಯ ಬಗ್ಗೆ ಅರಿವು ಮೂಡಿಸುವುದಾಗಿದೆ. ಶ್ರವಣದೋಷ ಎಂದರೇನು, ಇದಕ್ಕೆ ಕಾರಣವೇನು, ಆರಂಭಿಕ ಹಸ್ತಕ್ಷೇಪದ ಅಗತ್ಯತೆ, ಸಂವಹನೆಗೆ ಸಂಬಂಧಿಸಿದ ಸಮಸ್ಯೆಗಳು,

ತಮ್ಮ ಮಕ್ಕಳ ಪರ ವಕಾಲತ್ತು ಮಾಡುವ ಸಬಲೀಕೃತ ಪೋಷಕರ ಸಂಖ್ಯೆ ಗಣನೀಯ ಮಟ್ಟದಲ್ಲಿ ಇಲ್ಲದಿರುವ ಕೊರತೆ, ಬೆಂಬಲಿಸುವ ಗುಂಪುಗಳ ಕೊರತೆ, ಮಾಹಿತಿಯ ಕೊರತೆ, ಉದ್ಯೋಗಾವಕಾಶಗಳ ಕೊರತೆ ಹಾಗೂ ಇವೆಲ್ಲವೂ ಹೇಗೆ ಶ್ರವಣದೋಷವಿರುವವರ ಬದುಕನ್ನು ಬಾಧಿಸಿ, ಅವರಿಗೆ ತಮ್ಮ ಸ್ವಂತ ಬದುಕನ್ನು ರೂಪಿಸಿಕೊಳ್ಳಲು ಸಾಮರ್ಥ್ಯ ಇಲ್ಲದಂತೆ ಮಾಡುತ್ತವೆ ವೆಲ್ಲವನ್ನೂ ಈ ಸಮಸ್ಯೆ ಒಳಗೊಂಡಿದೆಯೆಂದು) – ನಮಗೆ ಈ ಅಧ್ಯಯನದ ಆವಿಷ್ಕಾರಗಳು ಹಾಗೂ ಕಳೆದ ಹತ್ತು ವರ್ಷಗಳ ನಮ್ಮ ಕೆಲಸವು ತೋರಿಸಿಕೊಟ್ಟಿವೆ.

ಭಾರತದಲ್ಲಿ, ಬಾಲ್ಯ ಕಿವುಡುತನವನ್ನು ಕುರಿತಾದ ಅಂಕಿ-ಅಂಶಗಳು ದಂಗುಬಡಿಸುವಂತಿದೆ. ನಮ್ಮ ದೇಶದಲ್ಲಿ, ಸಾವಿರದಲ್ಲಿ 5.6 – 10 ಜನರನ್ನು ಹುಟ್ಟಿದಾರಭ್ಯದ ಕಿವುಡುತನ ಬಾಧಿಸುತ್ತದೆ (National Health Portal of India) (ಭಾರತೀಯ ರಾಷ್ಟ್ರೀಯ ಆರೋಗ್ಯ ಜಾಲತಾಣ)). ಇದು ಹುಟ್ಟಿದ ಬಳಿಕದ ಆರೋಗ್ಯ ಮತ್ತು ಶುಚಿತ್ವದ ಕೊರತೆಯ ಕಾರಣದಿಂದಾಗಿ ಕಿವುಡುತನಕ್ಕೆ ಬಲಿಯಾಗುವ ಮಕ್ಕಳ ಸಂಖ್ಯೆಯನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಶ್ರವಣದೋಷದೊಂದಿಗೆ ಹುಟ್ಟುವ ಮಕ್ಕಳು ತಮ್ಮ ಸುತ್ತಲಿನ ಜಗತ್ತಿನ ಅರ್ಥವನ್ನು ಗ್ರಹಿಸಕೊಳ್ಳಲಾಗಲೀ ಅಥವಾ ತಮ್ಮನ್ನು ವ್ಯಕ್ತಪಡಿಸಿಕೊಳ್ಳಲಾಗಲಿ ಅಸಮರ್ಥರಾಗಿರುತ್ತಾರೆ. ಅವರು ತಮ್ಮ ಗೆಳೆಯರು, ಕುಟುಂಬದ ಸದಸ್ಯರೊಂದಿಗೆ ಹರಟೆ ಹೊಡೆಯಲಾಗುವುದಿಲ್ಲ, ತಮ್ಮ ಸುತ್ತ-ಮುತ್ತಲಿನವರನ್ನು ಅರ್ಥಮಾಡಿಕೊಳ್ಳಲು ಆಗುವುದಿಲ್ಲ ಅಥವಾ ಶಿಕ್ಷಕರಿಂದ ಕಲಿಯಲು ಆಗುವುದಿಲ್ಲ. ಅವರು ಪೂರ್ತಿ ಒಂಟಿಯಾಗಿ ಉಳಿದು, ನಮ್ಮ ಗದ್ದಲದ ಜಗತ್ತಿನಲ್ಲಿ ಮೌನದಲ್ಲಿ ಬದುಕುತ್ತಾರೆ.



‘ವಾಣಿ’ಯು ಶ್ರವಣದೋಷ ಪೀಡಿತ ಮಕ್ಕಳು ಮತ್ತು ಅವರ ಕುಟುಂಬಗಳ ಸಾಮಾಜಿಕ ಹಾಗೂ ಸಂವೇಗಾತ್ಮಕ ಸ್ವಾಸ್ಥ್ಯದ ಸಮಸ್ಯೆಗಳನ್ನು ಉದ್ದೇಶಿಸುತ್ತಲೇ, ಆ ಮಕ್ಕಳು ಭಾಷೆ ಮತ್ತು ಸಂವಹನ ಸಾಮರ್ಥ್ಯ ಹೊಂದುವಂತೆ ಮಾಡುವ ಕೆಲಸದಲ್ಲಿ ತೊಡಗಿದೆ. ‘ವಾಣಿ’ಯಲ್ಲಿ ಶ್ರವಣ ಸಂಕಷ್ಟಕ್ಕೆ ಒಳಗಾಗಿರುವ ಮಕ್ಕಳಿಗೆ ಸಂವಹನ ನಡೆಸುವುದು ಹೇಗೆ ಎಂದು ಬೋಧಿಸುವಂತೆಯೇ, ಅವರ ಕುಟುಂಬಗಳಿಗೆ ಅವರನ್ನು ಅರ್ಥಮಾಡಿಕೊಂಡು, ಅವರ ಸಾಮಾಜಿಕ ಹಾಗೂ ಭಾವನಾತ್ಮಕ ಅಗತ್ಯಗಳನ್ನು ಪೂರೈಸಲು ತರಬೇತಿ ನೀಡಲಾಗುತ್ತದೆ. ಯಾವುದೇ ಇಬ್ಬರು ಮಕ್ಕಳು ಒಂದೇ ರೀತಿ ಇರುವುದಿಲ್ಲ. ಆದ್ದರಿಂದ, ನಿರ್ದಿಷ್ಟ ಮಗುವೊಂದರ ಸಂವಹನಾತ್ಮಕ, ಸಾಮಾಜಿಕ, ಭಾವನಾತ್ಮಕ ಹಾಗೂ ಬೌದ್ಧಿಕ ಸಾಮರ್ಥ್ಯಗಳ ಆಧಾರದ ಮೇಲೆ ವಾರ್ಷಿಕ ಹಾಗೂ ತ್ರೈಮಾಸಿಕ ಗುರಿಗಳನ್ನು ಹೊಂದಿರುವ ವ್ಯಕ್ತಿಗತ ಶಿಕ್ಷಣ ಯೋಜನೆಯೊಂದನ್ನು (IEP (ಐಈಪಿ) – Individual education plan) ತಯಾರಿಸಿಕೊಳ್ಳಲಾಗುತ್ತದೆ. ಪ್ರತಿ ಮಗುವಿಗೂ ಪೂರ್ವ ವೃತ್ತಿಪರ ಕಿವುಡರ ಶಿಕ್ಷಕರನ್ನು (ToD (ಟಿಓಡಿ) – teacher of the deaf)



ನೇಮಿಸಲಾಗುತ್ತದೆ. ಈ ಶಿಕ್ಷಕರು ಮಗು ಹಾಗೂ ಅದರ ಪೋಷಕರ ಜೊತೆ ವಾರಕ್ಕೊಮ್ಮೆ ಒಂದು ಘಂಟೆಯಷ್ಟು ಕಾಲ ಸುದೀರ್ಘ ಸಂವಾದದಲ್ಲಿ ತೊಡಗುತ್ತಾರೆ. ಬೋಧನಾ ಪ್ರಕ್ರಿಯೆಯ ಅಂಗವಾಗಿ ಪೋಷಕರ ಉಪಸ್ಥಿತಿ ಕಡ್ಡಾಯವಾಗಿರುತ್ತದೆ. ಹೀಗೆ ಪ್ರಾರಂಭವಾದ ಕೆಲಸವನ್ನು ಮುಂದುವರಿಸಲು ಸಾಧ್ಯವಾಗಿ, ಮನೆಯಲ್ಲಿಯೂ ಅಭ್ಯಾಸನಿರತರಾಗಲು ಸಾಧ್ಯವಾಗುತ್ತದೆ.

ವಾರದ ಉಳಿದ ದಿನಗಳಂದು ಮಾಮೂಲಿ ಶಾಲೆಗೆ ಹೋಗುವಂತೆ ಮಗುವನ್ನು ಪ್ರೋತ್ಸಾಹಿಸಲಾಗುತ್ತದೆ. ಇದರಿಂದ ಮಗು ಮುಖ್ಯವಾಹಿನಿಯ ಅಂಗವಾಗಿ ಉಳಿದು, ಉಳಿದ ಮಕ್ಕಳೊಡನೆ ಸಾಮಾಜಿಕವಾಗಿ ಬೆರೆಯುವಂತಾಗುತ್ತದೆ. ಮಾಮೂಲಿ ಶಾಲೆಯಲ್ಲಿನ ಶಿಕ್ಷಕರಿಗೆ ಶ್ರವಣದೋಷ ಪೀಡಿತ ಮಗುವನ್ನು ನಿಭಾಯಿಸುವುದು ಹೇಗೆ ಮತ್ತು ಅದರಿಂದ ಅವರಲ್ಲಿನ ಅತ್ಯುತ್ತಮವಾದುದ್ದನ್ನು ಹೊರಸೆಳೆಯುವುದು ಹೇಗೆ ಎಂಬುದನ್ನು ಕುರಿತು ಕೌಶಲ್ಯ-ತರಬೇತಿ ನೀಡಲಾಗುತ್ತದೆ.

## ಸಹಭಾಗಿತ್ವದಲ್ಲಿ ಕಾರ್ಯಸಾಧನೆ

ಕೇಂದ್ರ ಅಥವಾ ರಾಜ್ಯ ಸರ್ಕಾರಗಳು ಈಗಾಗಲೇ ಜಾರಿಗೊಳಿಸಿ ಚಾಲ್ತಿಯಲ್ಲಿರುವ ಕೆಲವು ಯೋಜನೆಗಳು, ಕಾರ್ಯಕ್ರಮಗಳೊಂದಿಗೆ ನಾವು ನಮ್ಮ ಕಾರ್ಯಕ್ರಮಗಳನ್ನು ತಳಕು ಹಾಕಿಕೊಂಡರೆ ಮಾತ್ರ ಪರಿಣಾಮ ಬೀರಲು, ನಿಜವಾದ ಬದಲಾವಣೆ ತರಲು ಸಾಧ್ಯ ಎಂಬುದು ನಮ್ಮ ದೃಢ ನಂಬಿಕೆ. ಸರ್ಕಾರದ ಯೋಜನೆಗಳಿಗೆ ಸಾಧನ-ಸಲಕರಣೆಗಳೂ ಫಲಾನುಭವಿಯನ್ನು ತಲುಪುವ ಶಕ್ತಿಯೂ ಇವೆ. ಆದ್ದರಿಂದ ನಾವು ಸುಸ್ಥಿರ ಹಾಗೂ ದೂರಗಾಮಿ ಪರಿರ್ತನೆಗಳನ್ನು ಬಯಸುತ್ತಿದ್ದರೆ, ಸರ್ಕಾರದೊಂದಿಗೆ ಸಹಭಾಗಿತ್ವದಲ್ಲಿ ಕಾರ್ಯನಿರತರಾಗುವುದೇ ಮುನ್ನಡೆಯಲು ಇರುವ ತರ್ಕಬದ್ಧವಾದ ನಡೆ ಎಂದು ತೋರುತ್ತದೆ.

ಅಸ್ಸಾಮ್ ರಾಜ್ಯದಲ್ಲಿ 2007ರ ಅಕ್ಟೋಬರ್ ತಿಂಗಳಿನಿಂದ ‘ವಾಣಿ’ ಸಕ್ರಿಯವಾಗಿದ್ದು, ಶ್ರವಣದೋಷ ಪೀಡಿತ ಮಕ್ಕಳ ಜೀವನದಲ್ಲಿ ಅವರ ಪೋಷಕರು ತೊಡಗಿಸಿಕೊಳ್ಳುವಂತೆ ಮಾಡುವ ಅಗತ್ಯ ಹಾಗೂ ಶ್ರವಣದೋಷವಿರುವ ಶಿಶುಗಳು ಮತ್ತು ಪುಟ್ಟ ಮಕ್ಕಳನ್ನು ಗುರುತಿಸಿ, ಅವರಿಗೆ ಮುಂಚಿತವಾಗಿಯೇ ಆವಶ್ಯಕ ನೆರವು ದೊರೆಯುವಂತೆ ನೋಡಿಕೊಳ್ಳುವ ಅಗತ್ಯವು ಕಳೆದ ಹತ್ತು ವರ್ಷಗಳ

ನಮ್ಮ ಕೆಲಸದಲ್ಲಿ ನಾವು ಕಂಡುಕೊಂಡ ಅತಿ ದೊಡ್ಡ ಸತ್ಯವಾಗಿದೆ.

ಹುಟ್ಟಿನಿಂದಲೇ ಕಿವುಡು ಇರುವ ಅಥವಾ ಕ್ಷೀಣ ಶ್ರವಣಶಕ್ತಿ ಇರುವ ಮಕ್ಕಳು ಭಾಷೆ ಕಲಿಯಲು (ಮೌಖಿಕ ಮತ್ತು/ಅಥವಾ ದೃಶ್ಯಾತ್ಮಕ) ಮತ್ತು ಅವರ ವಯಸ್ಸಿಗೆ ಅನುಗುಣವಾದ ಸಂವಹನಾತ್ಮಕ, ಸಂಜ್ಞಾನಾತ್ಮಕ, ಶೈಕ್ಷಣಿಕ, ಸಾಮಾಜಿಕ ಹಾಗೂ ಭಾವನಾತ್ಮಕ ಬೆಳವಣಿಗೆ ಸಾಧಿಸಲು ನೆರವಾಗಲು ಅಗತ್ಯವಿರುವ ಜ್ಞಾನ, ತಿಳಿವಳಿಕೆ ಮತ್ತು ಸಂಪನ್ಮೂಲಗಳನ್ನು ಅವರ ಕುಟುಂಬಗಳಿಗೆ ದೊರಕಿಸುವುದಕ್ಕೆ ಅಂತಹ ಮಕ್ಕಳನ್ನು ಮುಂಚಿತವಾಗಿ ಗುರುತಿಸುವುದು ನಿರ್ಣಾಯಕವಾಗುತ್ತದೆ. ಶ್ರವಣೇಂದ್ರಿಯವು ಸುಸ್ಥಿತಿಯಲ್ಲಿರುವ ಮಗುವು ತನ್ನ ಸುತ್ತ-ಮುತ್ತಲಿನವರ ಮಾತು ಮತ್ತು ಭಾಷೆಯನ್ನು ಕೇಳಿಸಿಕೊಳ್ಳುವುದರ ಮೂಲಕ ಸಂವಹನಾತ್ಮಕ ಕೌಶಲಗಳನ್ನು ಹೊಂದುತ್ತದೆ. ಇದು ಶ್ರವಣದೋಷ ಪೀಡಿತ ಮಕ್ಕಳಿಗೆ ಸಾಧ್ಯವಿಲ್ಲ, ಏಕೆಂದರೆ ಕಿವುಡುತನವು ಅದಕ್ಕೆ ಭಾಷೆ ಕಲಿಯಲು ಅನುವು ಮಾಡಿಕೊಡುವುದಿಲ್ಲ. ಹೀಗಾಗಿ, ಅದಕ್ಕೆ ಕಲಿಯಲು ಯಾವುದೇ ವಿಧಾನವಿಲ್ಲ. ಅತಿ ಸಣ್ಣ ವಯಸ್ಸಿನ ಶ್ರವಣದೋಷ ಪೀಡಿತ ಮಗುವಿನ ನಿಜವಾದ ಸಂವಹನಾತ್ಮಕ ಹಾಗೂ ಶೈಕ್ಷಣಿಕ ಅಗತ್ಯಗಳ ಹಾಗೂ ಅದಕ್ಕೆ ಮನೆಯಲ್ಲಿ ಅಥವಾ ಆರಂಭಿಕ ಹಂತದ ಶಾಲಾಪೂರ್ವ ಕಾರ್ಯಕ್ರಮದಲ್ಲಿ ದಕ್ಕುವ ಕಲಿಕಾ ಅವಕಾಶಗಳ ನಡುವೆ ಅಂತರವಿದೆ. ಆದ್ದರಿಂದ, ಆರಂಭಿಕ ಹಸ್ತಕ್ಷೇಪದ ಕಾರ್ಯಕ್ರಮಗಳನ್ನು ಯೋಜಿಸಿ ನಡೆಸುವ ತುರ್ತು ಅಗತ್ಯವಿದ್ದು, ಇಂತಹ ಹಸ್ತಕ್ಷೇಪವು ಸೂಕ್ತ ಕಲಿಕೆ ಮತ್ತು ತಿಳಿವಳಿಕೆಯನ್ನು, ಶಾಲಾಪೂರ್ವ ಕೌಶಲಗಳನ್ನು ಮತ್ತು ಮಗುವಿನ ಹುಟ್ಟಿನಿಂದಲೇ ಭಾವನಾತ್ಮಕ ಬಾಂಧವ್ಯಗಳನ್ನು ಕಟ್ಟಿಕೊಳ್ಳುವ ಅವಕಾಶವನ್ನು ಅದಕ್ಕೆ ಕಲ್ಪಿಸಿಕೊಟ್ಟು, ಅದರ ಮುಂದಿನ ಬೆಳವಣಿಗೆ ಸುಭದ್ರವಾಗಿರುವಂತೆ ನೋಡಿಕೊಳ್ಳುತ್ತದೆ.

ನಮ್ಮ ಕಾರ್ಯಕ್ರಮಗಳು ಈಗಾಗಲೇ ಚಾಲ್ತಿಯಲ್ಲಿರುವ ಕಾರ್ಯಕ್ರಮಗಳ ಭಾಗವಾಗಲು ಸಂಬಂಧಿತ ಸರ್ಕಾರಿ ಇಲಾಖೆಗಳ ನಡುವೆ ಸಕಾರಾತ್ಮಕವಾಗಿ, ಸ್ನೇಹಪೂರ್ವಕವಾಗಿ ನಮ್ಮ ಕೆಲಸದ ಸ್ವರೂಪದ ಬಗ್ಗೆ ಅರಿವು ಮೂಡಿಸಿ, ಅವುಗಳೊಂದಿಗೆ ಸಕಾರಾತ್ಮಕ ಸಂಬಂಧವೊಂದನ್ನು ಸಾಧಿಸಲು ಅವರ ವಿಶ್ವಾಸವನ್ನು ಸಂಪಾದಿಸುವುದು ನಮ್ಮ ಮೊದಲ ಹೆಜ್ಜೆಯಾಗಬೇಕಿದೆ ಎಂದು ನಾವು ಕಂಡುಕೊಂಡೆವು.

### ಅಸ್ಸಾಮ್ ಕಾರ್ಯತಂತ್ರ

'ವಾಣಿ'ಯ ಉದ್ದೇಶ ಶ್ರವಣದೋಷ ಪೀಡಿತ ಮಕ್ಕಳಿಗೆ ಶಿಕ್ಷಣ ಒದಗಿಸುವುದಾದ್ದರಿಂದ, ನಾವು ಅಸ್ಸಾಮ್ ರಾಜ್ಯದ SSA (Sarva Shikshaa Abhiyan (ಸರ್ವ ಶಿಕ್ಷಾ ಅಭಿಯಾನ್)) (ಶಿಕ್ಷಣ ಇಲಾಖೆ) ಅನ್ನು 2007ರಲ್ಲಿ ಸಂಪರ್ಕಿಸಲು ಮೊದಲು ಮಾಡಿದೆವು.

- ನಿಧಾನವಾಗಿ, ಮತ್ತೆ-ಮತ್ತೆ ನಡೆದ ಹಲವು ಸಂವಹನಗಳ ಮೂಲಕ SSA ಅಧಿಕಾರಿಗಳು ಮಕ್ಕಳ ಕಿವುಡುತನದ ಸಂಕೀರ್ಣತೆಗಳನ್ನು ಅರ್ಥಮಾಡಿಕೊಳ್ಳಲು ಆರಂಭಿಸಿದರು. ಉದಾಹರಣೆಗೆ, ಕಿವಿಯಚ್ಚು ಇರದ ಶ್ರವಣ ಸಾಧನವು ಮಗುವಿಗೆ ಉಪಯೋಗವಿಲ್ಲ ಎಂಬುದನ್ನು SSA ನಿರ್ದೇಶಕರು 'ವಾಣಿ' ನಡೆಸಿದ ವಿಚಾರಸಂಕಿರಣವೊಂದರಲ್ಲಿ, ಮೊಟ್ಟಮೊದಲ ಬಾರಿಗೆ ಅರಿತುಕೊಂಡರು.
- ಒಮ್ಮೆ ಅಧಿಕಾರಿಗಳಿಗೆ ಮನವರಿಕೆಯಾದ ಮೇಲೆ 'ವಾಣಿ' ಸಂಸ್ಥೆಯು SSA ದ ಸ್ವಯಂಸೇವಕರು ಹಾಗೂ ಶಿಕ್ಷಕರಿಗೆ ತರಬೇತಿ ನೀಡುವುದನ್ನು ಆರಂಭಿಸಿತು. 2010ರಲ್ಲಿ ಶ್ರವಣದೋಷಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳಿಗೂ SSA 'ವಾಣಿ'ಯನ್ನು ರಾಜ್ಯ ಸಂಪನ್ಮೂಲ ಸಂಘಟನೆಯನ್ನಾಗಿ ನೋಡತೊಡಗಿತು. ಆದರೆ, ಅನತಿ ಕಾಲದಲ್ಲಿಯೇ ಸೇವೆಗಳು 0–6 ವಯಸ್ಸು ಗುಂಪಿನ ಪುಟ್ಟ ಮಕ್ಕಳನ್ನು ತಲುಪುತ್ತಿಲ್ಲ ಎಂಬುದನ್ನು ನಾವು SSA ದ ಮೂಲಕ ಕಂಡುಕೊಂಡೆವು.
- ನಮ್ಮ ಮುಂದಿನ ಹೆಜ್ಜೆ ಸಮಾಜ ಕಲ್ಯಾಣ ಇಲಾಖೆಯ 'ಸಮಗ್ರ ಮಕ್ಕಳ ಅಭಿವೃದ್ಧಿ ಸೇವಾ (Integrated Child Development Service (ICDS))' ವಿಭಾಗವನ್ನು ಸಂಪರ್ಕಿಸುವುದಾಗಿತ್ತು. ಅಷ್ಟು ಹೊತ್ತಿಗಾಗಲೇ ನಾವು ಶಿಕ್ಷಣ ಇಲಾಖೆಯೊಂದಿಗೆ ಸಂಪರ್ಕ ಸ್ಥಾಪಿಸಿದ್ದರಿಂದ, ಇದು ಈಗ ಸುಲಭಸಾಧ್ಯವಾಗಿತ್ತು. ಅಷ್ಟರಲ್ಲಿ ನಾವು ರಾಜ್ಯಗಳ ಉದ್ದಗಲಕ್ಕೂ, ಅದರಲ್ಲೂ ವಿಶೇಷವಾಗಿ ಅಸ್ಸಾಮ್ ರಾಜ್ಯಾದ್ಯಂತ, ಶ್ರವಣದೋಷ ಪೀಡಿತ ಮಕ್ಕಳ ಸ್ಥಿತಿ-ಗತಿಗಳ ಅಧ್ಯಯನವೊಂದನ್ನು ನಡೆಸಿದ್ದೆವು. 'ಅಸ್ಸಾಮ್ ರಾಜ್ಯದಲ್ಲಿ ಕಿವುಡು ಮಕ್ಕಳ ಸ್ಥಿತಿ-ಗತಿ' ಎಂಬ ವಿಚಾರಸಂಕಿರಣದ ಬಳಿಕ ನಮಗೆ ಮಹತ್ವದ ತಿರುವೊಂದು ದೊರಕಿತು. ಸಮಾಜ ಕಲ್ಯಾಣ ಇಲಾಖೆಗೆ ಈ ವಿಚಾರಸಂಕಿರಣದಲ್ಲಿ ಸಕ್ರಿಯವಾಗಿ ಭಾಗವಹಿಸಲು ಆಹ್ವಾನವಿತ್ತಿದ್ದ ನಾವು, ಇದರಲ್ಲಿ ನಮ್ಮ ಅಧ್ಯಯನದ ಫಲಿತಾಂಶಗಳನ್ನು ಹಂಚಿಕೊಂಡೆವು. ಇದಾದ ಬಳಿಕ, 2011ರಲ್ಲಿ, ಈ ನಿಟ್ಟಿನಲ್ಲಿ 'ವಾಣಿ'ಯೊಂದಿಗೆ ಕೈಜೋಡಿಸುವ ನಿರ್ಧಾರವನ್ನು ಇಲಾಖೆ ಕೈಗೊಂಡಿತು.
- 2012ರಲ್ಲಿ, ಅಸ್ಸಾಮ್ ರಾಜ್ಯದ ಸಮಾಜ ಕಲ್ಯಾಣ ಇಲಾಖೆಯ 'ರಾಜ್ಯ ಸಾಮಾಜಿಕ ತನಿಖಾ ಸಮಿತಿ'ಯ ಸದಸ್ಯ ಸಂಘಟನೆಯಂತೆ 'ವಾಣಿ'ಯನ್ನು ಪರಿಗಣಿಸಲಾಯಿತು.
- ತರುವಾಯ, ನಿರಂತರ ಸಹಭಾಗಿತ್ವದಲ್ಲಿ ಕಾರ್ಯನಿರತರಾಗುವ ಮೂಲಕ ಕೊನೆಗೂ ಈ ನಿರ್ಧಾರವನ್ನು ಸರ್ಕಾರ ಅನುಮೋದಿಸುವಂತೆ ಮನವೊಲಿಸಲು ಸಾಧ್ಯವಾಗಿ, ಒಡಂಬಡಿಕೆಗೆ (MoU) 2014ರಲ್ಲಿ ಸಹಿ ಹಾಕಲಾಯಿತು. 'ವಾಣಿ'ಯ ಕೆಲಸವು ಒಂದು ಬಲವರ್ಧಕದಂತೆ. ಈ ಯೋಜನೆಯಲ್ಲಿ ಶ್ರವಣದೋಷ ಪೀಡಿತ ಮಕ್ಕಳನ್ನು ಗುರುತಿಸುವುದು ಅತ್ಯಂತ ಮಹತ್ವದ ಕೆಲಸ ಹಾಗೂ ಅಂಗನವಾಡಿ ಕಾರ್ಯಕರ್ತರಿಗೆ ಅದನ್ನು ಮಾಡಲು ತಿಳಿದಿರುವುದು ಮುಖ್ಯವಾಗುತ್ತದೆ. ಎಲ್ಲಾ ಅಂಗನವಾಡಿ ಕಾರ್ಯಕರ್ತರಿಗೂ ಗುರುತಿಸುವ ಕೆಲಸದಲ್ಲಿ ತರಬೇತಿಯ ಅಗತ್ಯವಿದ್ದು, ತನ್ಮೂಲಕ, ಇನ್ನೂ ಹೆಚ್ಚು ಅಧಿಕೃತ ಅಂಕಿ-ಅಂಶ ಸಂಗ್ರಹಣೆ ಮಾಡಲು ನೆರವಾಗಬೇಕು' (Anil Phukan (ಅನಿಲ್ ಫುಕಾನ್), MIS ಉಸ್ತುವಾರಿ, ಸಮಾಜ ಕಲ್ಯಾಣ ಇಲಾಖೆ).
- ಶ್ರವಣದೋಷಕ್ಕೆ ಸಂಬಂಧಿಸಿದಂತೆ ಇರುವ ಕಳಂಕವು ತೊಡೆದುಹೋಗಲು ಶುರುವಾಗಿ, ಹೆಚ್ಚಿನ ಸಂಖ್ಯೆಯಲ್ಲಿ ಜನ ಸಾಂಕೇತಿಕ ಭಾಷೆ ಬಳಸುವುದನ್ನು ಕಲಿಯಲು ಬಯಸಿದರು.

ಆದಿಯಲ್ಲಿ, ನಾವು ದೊಡ್ಡ ಪ್ರಮಾಣದ ಯೋಜನೆಗೆ ಪೂರ್ವಭಾವಿಯಾಗಿ ಮೂರು ಜಿಲ್ಲೆಗಳಲ್ಲಿ ಸಣ್ಣ ಪ್ರಮಾಣದ ಅಧ್ಯಯನವೊಂದನ್ನು ನಡೆಸಲು ನಿರ್ಧರಿಸಿದೆವು. ಈ ಯೋಜನೆಯು ಕಾಮ್ ರೂಪ್, ನಲ್ಬಾರಿ ಮತ್ತು ನಗಾಂವ್ ಜಿಲ್ಲೆಗಳ ಬ್ಲಾಕ್‌ಗಳಲ್ಲಿ 26 ಉಪಕೇಂದ್ರಗಳನ್ನು ಸ್ಥಾಪಿಸುವತ್ತ ಲಕ್ಷ್ಯವಿರಿಸಿತು. ಇದನ್ನು ಮೂರು ವರ್ಷಗಳಲ್ಲಿ ಪೂರೈಸಲು ಹಾಗೂ ಅಸ್ಸಾಮ್ ರಾಜ್ಯದಲ್ಲಿ ಶ್ರವಣದೋಷ ಪೀಡಿತ ಮಕ್ಕಳಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಪರಿಹಾರ ಸೂಚಿಸಬಲ್ಲ ಎಲ್ಲಾ ರೀತಿಯ ಸೇವೆಗಳು, ಮಾಹಿತಿ, ಸಂಪನ್ಮೂಲ ಮತ್ತು ಪರಿಣಿತಿ ಒಂದೇ ಎಡೆಯಲ್ಲಿ ದೊರೆಯುವಂತೆ ಕಾರ್ಯನಿರ್ವಹಿಸುವ 'ರಾಜ್ಯ ನಾಭಿ ಸಂಪನ್ಮೂಲ ಕೇಂದ್ರ'ವೊಂದನ್ನು

ಗುವಾಹಟಿಯಲ್ಲಿ ಸ್ಥಾಪಿಸಿ ಬಲಪಡಿಸುವ ಗುರಿಯನ್ನು ಹೊಂದಿತ್ತು. ಭಾಷೆಯು ಒಂದು ಭಾರಿ ಸಮಸ್ಯೆಯಾಗಿರುವುದರಿಂದ, ನಮ್ಮ ಬೋಧನಾ-ಕಲಿಕೆ ಸಾಮಗ್ರಿಗಳೆಲ್ಲವೂ ಅಸ್ಸಾಮಿ ಭಾಷೆಯಲ್ಲಿ ದೊರೆಯುವಂತೆ ನೋಡಿಕೊಂಡೆವು.

**ರಾಜ್ಯ ನಾಭಿ ಸಂಪನ್ಮೂಲ ಕೇಂದ್ರವು:**

- ಪುಟ್ಟ ವಯಸ್ಸಿನ (0 – 6 ವರ್ಷ) ಶ್ರವಣದೋಷ ಪೀಡಿತ ಮಕ್ಕಳ ಬೆಳವಣಿಗೆಗೆ ಅಗತ್ಯವಾಗಿರುವ ಸಂವಹನ ಸಾಮರ್ಥ್ಯದ, ಭಾಷೆ ಹಾಗೂ ಸಾಕ್ಷರತೆಯ ಕೌಶಲಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗುವಂತೆ ಆರಂಭಿಕ ವರ್ಷಗಳಲ್ಲೇ ತನ್ನ ಹಸ್ತಕ್ಷೇಪ ಸೇವೆಗಳನ್ನು ಒದಗಿಸುವ ಮತ್ತು ಅದರ ಪರಿಣಾಮವನ್ನು ಅಳೆಯುವ ಒಂದು ಅತ್ಯುತ್ತಮ ಮಾದರಿ ಪ್ರದರ್ಶಕ ಕೇಂದ್ರವಾಗಿರುತ್ತದೆ.
- ಗ್ರಾಮೀಣ ಸಮುದಾಯ ಹಾಗೂ ದುರ್ಗಮ ಸಮುದಾಯಗಳಿಗೆ ಪ್ರಸ್ತುತವಾದ ನವೀನ ಬೋಧನಾ ತಂತ್ರಗಳನ್ನು ಹಾಗೂ ಸಾಮಗ್ರಿಯನ್ನು ರೂಪಿಸುವ ನಿಟ್ಟಿನಲ್ಲಿ ಒಂದು ಸಂಶೋಧನಾ ಕೇಂದ್ರವಾಗಿರುತ್ತದೆ.
- ಸಲಹೆ, ಮಾರ್ಗದರ್ಶನಗಳ ಸೇವೆಗಳಿಂದ ಹಿಡಿದು, ಶ್ರವಣದೋಷ ಪೀಡಿತ ಮಕ್ಕಳ ಪೋಷಕರಿಗೆ ಆರೈಕೆಯವರಿಗೆ ಕೌಶಲ ತರಬೇತಿ ಕಾರ್ಯಕ್ರಮಗಳ ವರೆಗೆ ಅಗತ್ಯಾಧಾರಿತ ಬೆಂಬಲ ನೀಡುವ ಒಂದು ಪೋಷಕ ಸ್ನೇಹಿ ಕೇಂದ್ರವಾಗಿರುತ್ತದೆ.
- ಹಿರಿಯ ಶ್ರವಣದೋಷ ಪೀಡಿತ ಮಕ್ಕಳು ಸೂಕ್ತ ಮುಖ್ಯವಾಹಿನಿಯ ತರಗತಿಗಳಿಗೆ ಹಾಗೂ ಔದ್ಯೋಗಿಕ ಶಿಕ್ಷಣದಂತಹ ರ್ಯಾಯ ಸ್ವರೂಪಗಳ ಶಿಕ್ಷಣ ಕ್ಷೇತ್ರಗಳಿಗೆ ಪ್ರವೇಶಾವಕಾಶ ಪಡೆಯಲು ಅವರನ್ನು ಸಜ್ಜುಗೊಳಿಸಿ ಸಮರ್ಥರನ್ನಾಗಿಸಲು ಅಗತ್ಯವಿರುವ ಶೈಕ್ಷಣಿಕ ಬೆಂಬಲವನ್ನು ಪೂರೈಸುವ ಕೇಂದ್ರವಾಗಿರುತ್ತದೆ.

ಮೊದಲ ಎರಡು ವರ್ಷಗಳು ಶ್ರವಣದೋಷ ಪೀಡಿತ ಮಕ್ಕಳನ್ನು ಗುರುತಿಸುವ ಹಾಗೂ ಆ ವೇಳೆಗಾಗಲೇ ಅಸ್ತಿತ್ವದಲ್ಲಿದ್ದು, ವಾಸ್ತವವಾಗಿ, ಅಂಗನವಾಡಿ ಕೇಂದ್ರಗಳಾಗಿದ್ದ ಬ್ಲಾಕ್ ಸಾಧನ ಕೇಂದ್ರಗಳಲ್ಲಿ ನಮ್ಮ ನಾಭಿ ಸೇವಾ ಕೇಂದ್ರದ ಸೇವೆಗಳನ್ನು ಉಪಕ್ರಮಿಸುವ ದಿಕ್ಕಿನಲ್ಲಿ ನಮ್ಮ ಗಮನ ಕೇಂದ್ರೀಕೃತವಾಗಿತ್ತು. ನಾವು ಅವರ ಕಟ್ಟಡಗಳನ್ನು ಬಳಸಿಕೊಂಡದ್ದಷ್ಟೇ ಅಲ್ಲ, ಆ ವೇಳೆಗಾಗಲೇ ಪರಿಣಾಮಕಾರಿಯಾಗಿ ನಡೆಯುತ್ತಿದ್ದ ಚಟುವಟಿಕೆಗಳೊಂದಿಗೆ ನಮ್ಮ ಬೋಧನೆಯನ್ನು ಹೊಂದಿಸಿಕೊಂಡೆವು. ಸಾಧನ ಕೇಂದ್ರಕ್ಕೆ ಬರುತ್ತಿದ್ದ ಎಲ್ಲಾ ಮಕ್ಕಳೂ ಇದರ ಲಾಭಪಡೆಯುತ್ತಿದ್ದಂತೆ ಈ ಕೇಂದ್ರಗಳು ಜನಪ್ರಿಯವಾಗ ತೊಡಗಿದವು. ಏಕೆಂದರೆ ಅಂಗನವಾಡಿ ಕಾರ್ಯಕರ್ತೆಯರು ತರಬೇತಿ ಪಡೆದು ಆರಂಭಿಕ ಹಂತದಲ್ಲೇ ಗುರುತಿಸುವ ಹಾಗೂ ಆರಂಭಿಕ ಪ್ರಚೋದನೆ ನೀಡುವ ವಿಷಯದಲ್ಲಿ ಕೌಶಲಗಳನ್ನು ಹೊಂದಿ ದಕ್ಷ ಶಿಕ್ಷಕರಾಗಿದ್ದರು. ಇಂತಹ ಇಪ್ಪತ್ತಾರು ಕೇಂದ್ರಗಳು ಸಜ್ಜುಗೊಂಡು ಕಾರ್ಯನಿರ್ವಹಿಸತೊಡಗಿದವು. ಈ ಕೇಂದ್ರಗಳ ಉಸ್ತುವಾರಿ ಹೊಂದಿದ್ದ ಬಹುತೇಕ ಅಂಗನವಾಡಿ ಕಾರ್ಯಕರ್ತೆಯರು ಮಕ್ಕಳ ಪೋಷಕರೊಂದಿಗಿನ ಸಭೆಗಳಲ್ಲಿ 'ವಾಣಿ' ತಂಡಕ್ಕೆ ನೆರವಾದರು. ಮೂರನೆಯ ವರ್ಷವು ಅನಾವರಣಗೊಳ್ಳುತ್ತಿದ್ದಂತೆ, ಬ್ಲಾಕ್ ಗಳಲ್ಲಿ ಪೋಷಕರು ಮತ್ತು ಅಂಗನವಾಡಿ ಕಾರ್ಯಕರ್ತೆಯರಲ್ಲಿ ಮುಂದಿನ ಸಂಪನ್ಮೂಲ ವ್ಯಕ್ತಿಗಳಾಗಿ ಕೆಲಸ ಮಾಡಲಿರುವ ನಾಯಕರನ್ನು ಗುರುತಿಸುವ ಕೆಲಸ ಮೊದಲಾಯಿತು.

ತರಬೇತಿ ಕಾರ್ಯಾಗಾರಗಳಲ್ಲಿ ಭಾಗವಹಿಸುವ ಮುನ್ನ, ಅದರಲ್ಲಿ ಭಾಗವಹಿಸಿದ ಅಂಗನವಾಡಿ ಕಾರ್ಯಕರ್ತೆಯರಲ್ಲಿ ಶೇಕಡಾ 2ರಷ್ಟು ಮಂದಿಯ ಜ್ಞಾನಮಟ್ಟ ಶೇಕಡಾ 20ಕ್ಕಿಂತಲೂ ಕಡಮೆಯಿತ್ತು. ಕಾರ್ಯಗಾರಗಳಲ್ಲಿ ಭಾಗವಹಿಸಿದ ಬಳಿಕ ಅವರಲ್ಲಿ ಶೇಕಡಾ 75ರಷ್ಟು ಮಂದಿ ಶ್ರವಣದೋಷ ಸಮಸ್ಯೆ ಕುರಿತಾಗಿ ತಮ್ಮ ಜ್ಞಾನವನ್ನು ಶೇಕಡಾ 70ಕ್ಕೂ ಮೀರಿ ಹೆಚ್ಚಿಸಿಕೊಂಡಿದ್ದರು.

ಪೋಷಕರ ನಡುವೆ ಕಿವುಡುತನ ಮತ್ತು ಸಂವಹನಾ ಕೌಶಲಗಳನ್ನು ಕುರಿತಾಗಿ ಶೇಕಡಾ 10ರಷ್ಟು ಜನರ ಜ್ಞಾನಮಟ್ಟವು ಶೇಕಡಾ 20ಕ್ಕಿಂತಲೂ ಕಡಮೆ ಮಟ್ಟದ್ದಾಗಿತ್ತು. ಈ ಕಾರ್ಯಾಗಾರಗಳಲ್ಲಿ ಭಾಗವಹಿಸಿದ ಮೇಲೆ ಅವರಲ್ಲಿ ಶೇಕಡಾ 85ರಷ್ಟು ಮಂದಿ ಶ್ರವಣದೋಷ ಮತ್ತು ಸಂವಹನಾ ಕೌಶಲಗಳನ್ನು ಕುರಿತಾಗಿ ತಮ್ಮ ಜ್ಞಾನವನ್ನು ಶೇಕಡಾ 70ಕ್ಕೂ ಮೀರಿ ಹೆಚ್ಚಿಸಿಕೊಂಡಿದ್ದರು.

ತಮ್ಮ ಮಗುವಿನೊಡನೆ ಸಂವಹನೆಯ ಮಟ್ಟವನ್ನು ಈ ಬೋಧನೆಯು ಸುಧಾರಿಸಿದ್ದನ್ನು ಕಂಡ ಪೋಷಕರು ತಮ್ಮನ್ನು ತೊಡಗಿಸಿಕೊಳ್ಳಲು ಆರಂಭಿಸಿರುವುದನ್ನು ಹಾಗೂ ಅವರು ನಿಯತವಾಗಿ ಈ ಕೇಂದ್ರಗಳಿಗೆ ಬಂದುಹೋಗುವ ಆಸಕ್ತಿ ತೋರುತ್ತಿದ್ದಾರೆ ಎಂಬುದನ್ನು ಅಂಗನವಾಡಿ ಕೇಂದ್ರಗಳಿಗೆ ಇತ್ತ ಭೇಟಿಗಳು ಹೊರಗೆಡಹಿದವು. ತಮ್ಮ ಮಗುವಿನಲ್ಲಿ ಅರ್ಥಮಾಡಿಕೊಳ್ಳುವ ಹಾಗೂ ಬರೆಯುವ ಕೌಶಲಗಳಲ್ಲಿ ಗಮನಾರ್ಹ ಪ್ರಗತಿಯನ್ನು ಕಂಡದ್ದರಿಂದ ತಮ್ಮ ಮಗುವಿನ ಗ್ರಹಣಶಕ್ತಿಯಲ್ಲಿ ಸುಧಾರಣೆಯಾಗಿರುವುದನ್ನು ಎಲ್ಲಾ ತಾಯಂದಿರೂ ಗಮನಿಸಿದರು. ಈ ಮಕ್ಕಳು ಮಾಮೂಲಿ ಶಾಲೆಗಳಿಗೆ ಹೋಗುತ್ತಿದ್ದಾಗ ಅವರಲ್ಲಿ ಇಂತಹ ಬೆಳವಣಿಗೆಯನ್ನು ಈ ಹಿಂದೆ ಅವರು ಕಂಡಿರಲಿಲ್ಲ. SSA ಜೊತೆ ಕಾರ್ಯನಿರತವಾದ 'ವಾಣಿ' ಸಂಸ್ಥೆಯ ಕೆಲಸದ ಪರೋಕ್ಷ ಪ್ರಭಾವವೆಂದರೆ ಈಗ ಬ್ಲಾಕ್ ಹಂತದ 'ನುರಿತ ತರಬೇತುಗಾರ'ರಿಗೂ 'ವಾಣಿ' ತರಬೇತುಗಾರರು ಸಾಂಕೇತಿಕ ಭಾಷೆಯ ತರಬೇತಿ ನೀಡುತ್ತಿದ್ದುದಾಗಿತ್ತು. ಈ ಕೌಶಲಗಳನ್ನು ಸಾಮಾನ್ಯ ಶಾಲಾ ಶಿಕ್ಷಕರಿಗೆ ತಲುಪಿಸಲು ಅವರು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು.

ಜಿಲ್ಲಾ ಮತ್ತು ಬ್ಲಾಕ್ ಸ್ತರದ ಅಧಿಕಾರಿಗಳನ್ನು ಗೆಲುವಿನಲ್ಲಿ ಮಾತ್ರ ತೊಡಗಿಸಿಕೊಳ್ಳುವುದಲ್ಲದೆ, ಅವರೊಡನೆ ನಮ್ಮೆದುರಿರುವ ಸವಾಲುಗಳನ್ನೂ ಪ್ರಾಮಾಣಿಕವಾಗಿ ಹಂಚಿಕೊಂಡು, ಅವರಿಗೂ ತಮ್ಮ ವಿಚಾರಗಳನ್ನು, ಹಾಗೂ ಅಲೋಚನೆಗಳನ್ನು ನಮ್ಮೊಡನೆ ಹಂಚಿಕೊಳ್ಳಲು ಪ್ರೋತ್ಸಾಹಿಸುವ ಮೂಲಕ ಅವರೊಂದಿಗಿನ ಸಂಬಂಧವನ್ನು ನಿರಂತರವಾಗಿ ಬಲಪಡಿಸಬೇಕಾಗುತ್ತಿತ್ತು. ಅವರ ಹೆಚ್ಚಿದ ಸಹಕಾರದೊಂದಿಗೆ ನಾವು ನಿಧಾನವಾಗಿ ಯೋಜನೆಯ ಗುರಿಗಳನ್ನು ಸಾಧಿಸಲು ಸಾಧ್ಯವಾಯಿತು.

ಇಂದು SSA ಮತ್ತು ಸಮಾಜ ಕಲ್ಯಾಣ ಇಲಾಖೆಯು 'ವಾಣಿ' ಸಂಸ್ಥೆಯ ತಾಂತ್ರಿಕ ಬೆಂಬಲದೊಂದಿಗೆ 26 ಸಾಧನ್ ಕೇಂದ್ರಗಳಲ್ಲಿ ನಡೆಯುತ್ತಿರುವ ಕೆಲಸವನ್ನು ಕಾಯ್ದುಕೊಳ್ಳುವ ಹಾಗೂ ಯೋಜನೆಯು ಇತರ ಜಿಲ್ಲೆಗಳಿಗೂ ವಿಸ್ತರಿಸಿ ಮುನ್ನಡೆಯುವಂತೆ ನೋಡಿಕೊಳ್ಳುವ ಕಾರ್ಯತಂತ್ರಗಳನ್ನು ಗುರುತಿಸುವಲ್ಲಿ ನಿರತರಾಗಿದ್ದಾರೆ.

**ಮುಖ್ಯ ಅನುಭವಾತ್ಮಕ ಕಲಿಕೆಗಳು**

- ಎಲ್ಲರಂತೆಯೇ ಸರ್ಕಾರಿ ಅಧಿಕಾರಿಗಳಿಗೂ ಸಮಸ್ಯೆಗಳನ್ನು ಕುರಿತು ವಿನಯಪೂರ್ವಕವಾಗಿ, ತಾಳ್ಮೆಯಿಂದ, ನಿರಂತರವಾಗಿ ತಿಳಿವಳಿಕೆ ನೀಡಬೇಕಾಯಿತು. ಸಾಮಾನ್ಯವಾಗಿ ಸರ್ಕಾರಿ ಅಧಿಕಾರಿಗಳು 'ಸರ್ಕಾರೇತರ ಸಂಸ್ಥೆ'ಗಳನ್ನು ಸಂದೇಹದಿಂದ ಕಾಣುತ್ತಾರೆ. ಎದುರಾಳಿಗಳಂತೆ ಅಲ್ಲದೆ, ಮಿತ್ರರಂತೆ ಸಂಬಂಧಗಳನ್ನು ಕಟ್ಟಿಕೊಳ್ಳುವ ಅಗತ್ಯವಿದ್ದು, ನಡೆಯುತ್ತಿರುವ ತಮ್ಮದೇ ಎಂಬ ಭಾವನೆಯನ್ನು ಅವರು ಬೆಳೆಸಿಕೊಳ್ಳಲು

ನೆರವಾಗುವ ಅಗತ್ಯವಿದೆ.

- ತರಬೇತಿ ಪಡೆಯುವವರು ಅದರಲ್ಲಿ ವೈಯಕ್ತಿಕ ಕೌಶಲಾಭಿವೃದ್ಧಿಯನ್ನಷ್ಟೇ ಅಲ್ಲದೆ, ಕಾರ್ಯಕ್ರಮ ವೇಳಾಪಟ್ಟಿಗಳನ್ನು ತಯಾರಿಸುವ, ಪ್ರಯಾಸದ ಬರಹ ಬೇಡದ ಸಂಕ್ಷಿಪ್ತ ವರದಿಗಳನ್ನು ಸಜ್ಜುಗೊಳಿಸುವ, ವ್ಯವಸ್ಥಿತ ರೀತಿಯಲ್ಲಿ ನಿಖರ ದಾಖಲೆಗಳನ್ನು ಇಟ್ಟುಕೊಳ್ಳುವ ಹಾಗೂ ಕರಣಿಕ ಜ್ಞಾನವನ್ನು ಗಳಿಸುವ ಕೌಶಲಗಳಲ್ಲಿ ಪರಿಣಿತಿ ಹೊಂದುತ್ತಿರುವ ವೃತ್ತಿಪರರಂತೆ ತಮ್ಮನ್ನು ಪರಿಗಣಿಸಲು ಆರಂಭಿಸಿದಾಗ ಸರ್ಕಾರಿ ನೌಕರರ ವಿಶಿಷ್ಟೀಕೃತ ತರಬೇತಿಗೆ ಉತ್ತಮವಾದೊಂದು ಪ್ರತಿಕ್ರಿಯೆ ದೊರೆಯುತ್ತದೆ.
- ಕೆಲಸ ನಡೆಯುತ್ತಿರುವುದನ್ನು ಸಾಬೀತುಮಾಡಲು ನಿಜವಾದ ಪುರಾವೆಯ ಅಗತ್ಯವಿರುತ್ತದೆ. ಈಗಾಗಲೇ ಅಸ್ತಿತ್ವದಲ್ಲಿದ್ದ ಅಂಗನವಾಡಿ ಕೇಂದ್ರಗಳಲ್ಲಿ ಬೆಳೆದು ನಿಂತ 28 ಸಾಧನ್ ಕೇಂದ್ರಗಳು ಇದನ್ನು ಸಾಬೀತುಮಾಡಿದವು. 'ವಾಣಿ' ಸಂಸ್ಥೆಯು ಈ ಕೇಂದ್ರಗಳಿಗೆ ಅಗತ್ಯವಾದ ಬೋಧನಾ-ಕಲಿಕೆಯ ಸಾಮಗ್ರಿಗಳನ್ನು ಒದಗಿಸಿತು. ಇದರಿಂದ ಕೇವಲ ಶ್ರವಣದೋಷ ಪೀಡಿತ ಮಕ್ಕಳಿಗಳಷ್ಟೇ ಲಾಭವಾಗಲಿಲ್ಲ, ಬದಲಿಗೆ, ಈ ಕೇಂದ್ರಗಳಿಗೆ ಬರುತ್ತಿದ್ದ ಇತರ ಮಕ್ಕಳೂ ಇದರಿಂದ ಲಾಭ ಪಡೆದರು. ರಾಜ್ಯ ಸಂಪನ್ಮೂಲ ಕೇಂದ್ರವೊಂದರ ಸ್ಥಾಪನೆಯು ಉತ್ತಮ ಕಾರ್ಯವಿಧಾನವನ್ನು ಪ್ರದರ್ಶಿಸಲು ಸಾಧ್ಯವಾಗಿ, ಸರ್ಕಾರಿ ಅಧಿಕಾರಿಗಳು ಇದರ ನಿಜ ಲಾಭಪಡೆಯುತ್ತಿರುವ ಜನರೊಂದಿಗೆ ನೇರ ಸಂಪರ್ಕಕ್ಕೆ ಬರುವಂತೆ ಮಾಡಿತು.
- ಅನೇಕವೇಳೆ, ಸರ್ಕಾರದೊಂದಿಗೆ ಕೈಜೋಡಿಸುವುದೆಂದರೆ ಒಟ್ಟಾಗಿ ಕೆಲಸಮಾಡಿ ಅಭ್ಯಾಸವಿರದ ಹಲವು ರೀತಿಯ ಇಲಾಖೆಗಳು/ಸಚಿವಾಲಯಗಳ ಜೊತೆ ವ್ಯವಹರಿಸುವುದೇ ಆಗಿರುತ್ತದೆ. ಹೀಗಾಗಿ, ನಮ್ಮ ಗಮನವು ಸಹಯೋಗ ಮತ್ತು ಸಮನ್ವಯದ ಕಡೆಗೆ ಇರಬೇಕಾಗುತ್ತದೆ. ನಿರ್ದೇಶನಾ ಸಮಿತಿಯ ಸಭೆಗಳು ಇದಕ್ಕೆ ಉದಾಹರಣೆಯಾಗಿವೆ. ಇದರಲ್ಲಿ ಜಿಲ್ಲಾಧಿಕಾರಿ, ನೋಡಲ್ ಅಧಿಕಾರಿಗಳು ಹಾಗೂ SSA ಶಿಕ್ಷಕರು ಪಾಲ್ಗೊಂಡರು. ಯೋಜನೆಗಳನ್ನು ಒಟ್ಟುಗೂಡಿ ಆಯೋಜಿಸ ಲಾಗುತ್ತದೆ ಎಂಬುದು ಇದರಿಂದ ಖಾತ್ರಿಗೊಂಡು, ಎಲ್ಲರಿಗೂ ತಮ್ಮ ಹೊಣೆ ಏನೆಂಬುದು ತಿಳಿದದ್ದಷ್ಟೇ ಅಲ್ಲದೆ, ಅವರಿಂದ ಏನನ್ನು ನಿರೀಕ್ಷಿಸಲಾಗುತ್ತದೆ ಎಂಬುದೂ ಮನದಟ್ಟಾಯಿತು.
- ಸರ್ಕಾರದೊಂದಿಗೆ ಸಂಬಂಧ ಸ್ಥಾಪಿಸಲು ಮಾನವ ಸಂಪನ್ಮೂಲದ ಆಯ್ಕೆಯಲ್ಲಿ ಪ್ರಜ್ಞಾಪೂರ್ವಕ ಪ್ರಯತ್ನವೊಂದರ ಅಗತ್ಯವಿದೆ. ಅಧಿಕಾರಿಗಳನ್ನು ತಮ್ಮವರೆಂದು, ತಮ್ಮ ಸಮುದಾಯದಿಂದ ಆಯ್ಕೆಯಾದವರೆಂದು, ತಮ್ಮ ಭಾಷೆ ಮಾತನಾಡುವವರೆಂದು ಕಂಡಾಗಲೇ ಜನ ಅವರಿಂದ ಅಪಾಯವಿಲ್ಲವೆಂದು ಬಗೆಯುವುದು. ನಮ್ಮ ಎಲ್ಲಾ ತರಬೇತಿ ಸಾಮಗ್ರಿ ಹಾಗೂ ಪೋಸ್ಟರ್ ಗಳು ಸ್ಥಳೀಯ ಭಾಷೆಯಲ್ಲಿಯೂ ಇದ್ದುದು ಈ ನಂಬುಗೆಗಳಿಗೆ ಇಂಬು ನೀಡಿದವು.
- ಸರ್ಕಾರಿ ನೌಕರರು ಮಾಡುವ ಹೆಚ್ಚಿನ ಕೆಲಸಕ್ಕೆ ಅಥವಾ ಅವರಾಗಿಯೇ ಒಪ್ಪಿಕೊಳ್ಳುವ ಹೆಚ್ಚಿನ ಕೆಲಸಕ್ಕೆ ಸೂಕ್ತ ಪ್ರತಿಫಲ ನೀಡಬೇಕಾಗುತ್ತದೆ. ಅವರ ದಿನನಿತ್ಯದ ಸಾರಿಗೆ ಖರ್ಚುಗಳಿಗಾಗಿ ಒಂದಿಷ್ಟು ಹಣ, ಅವರು ಮಾಡಿದ ಕೆಲಸವನ್ನು ಗುರುತಿಸಿ ಪ್ರತಿಫಲ ಸ್ವರೂಪವಾಗಿ ಕೊಂಚ ವೇತನ ಅಥವಾ ಪುರಸ್ಕಾರಗಳನ್ನು ನೀಡುವುದು ಗಣನೀಯ ಫಲಿತಾಂಶ ನೀಡುತ್ತದೆ. ಉದಾಹರಣೆಗೆ, ಅಂಗನವಾಡಿ ಕಾರ್ಯಕರ್ತರಿಗೆ ಸರ್ಕಾರದ ವತಿಯಿಂದ ಅತ್ಯಲ್ಪ ಮೊತ್ತದ ಹಣ ಸಂದಾಯ ವಾಗುತ್ತಿದ್ದು, ಅನೇಕವೇಳೆ, ಅವರ ಸಾರಿಗೆ ವ್ಯವಸ್ಥೆಯ ಖರ್ಚು ಅವರ ಭತ್ಯದ ಬಹುಪಾಲನ್ನು ಕಿತ್ತುಕೊಳ್ಳುತ್ತದೆ.
- ಸರ್ಕಾರದೊಂದಿಗೆ ಕೆಲಸಮಾಡುವುದು ದೀರ್ಘಕಾಲಿಕ ಬದ್ಧತೆಯನ್ನು ಬೇಡುತ್ತದೆ ಎಂಬುದು ಹಾಗೂ ಗತಿ ಶೀಲತೆ ಮತ್ತು ಆದ್ಯತೆಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಸಮಾಲೋಚಿಸಿ ನಿರ್ವಹಿಸಬೇಕು ಎಂಬುದೇ ಬಹುಶಃ ನಾವು ಕಲಿತ ಅತಿ ಮಹತ್ತ್ವದ ಪಾಠವೆನ್ನಬಹುದು.
- ನಾವು ಎದುರಿಸಿದ ಅತಿ ದೊಡ್ಡ ಸವಾಲೆಂದರೆ ಅಧಿಕಾರಿಗಳನ್ನು ವರ್ಗಾಯಿಸಿದಾಗ ಎದುರಾಗುವ ಕಷ್ಟ ಹಾಗೂ ಅವರ ಜಾಗಕ್ಕೆ ಬರುವ ನೂತನ ಅಧಿಕಾರಿಗಳನ್ನು ಮತ್ತೊಮ್ಮೆ ಮೊದಲಿನಿಂದ ಕೆಲಸದಲ್ಲಿ ಪಳಗಿಸುವುದಾಗಿತ್ತು. ಆದಾಗ್ಯೂ, ಜನರನ್ನು ನಮ್ಮ ಗೋಷ್ಠಿಗಳ ಹಾಗೂ ತಿಳಿವಳಿಕೆ ಹೆಚ್ಚಿಸುವ ಸಭೆಗಳ ಎಲ್ಲಾ ಹಂತಗಳಲ್ಲೂ ತೊಡಗಿಸುವುದರಿಂದ ಒಂದು ಮಟ್ಟಕ್ಕೆ ಕಲಿಕೆ ಮತ್ತು ನಿರಂತರತೆ ಉಳಿಯುವಂತೆ ಆಗುತ್ತದೆ ಎಂಬುದನ್ನು ಸಹ ಕಂಡುಕೊಂಡೆವು.

## ಉಪಸಂಹಾರ

ಸರ್ಕಾರಿ ಅಧಿಕಾರಿಗಳು ಇತರ ಜನರಿಗಿಂತ ಭಿನ್ನರೇನಲ್ಲ ಎಂಬುದನ್ನು ನಾವು ಅರಿಯುವುದು ಮುಖ್ಯವಾಗುತ್ತದೆ. ನಾವೆಲ್ಲರೂ, ನಮ್ಮದೇ ಆದ ವೈಯಕ್ತಿಕ ಪೂರ್ವಗ್ರಹ, ಒಳ್ಳೆಯ ಹಾಗೂ ಕೆಟ್ಟ ದಿನಗಳು ಇರುವಂತಹ ಮನುಷ್ಯರಷ್ಟೆ. ಸಾಮಾನ್ಯವಾಗಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ವಲಯದ ನಡುವಿನ ಸಂಬಂಧವು ಸಂದೇಹಗ್ರಸ್ತ ಅವಿಶ್ವಾಸದಿಂದ ತುಂಬಿಹೋಗಿದೆ. ಈ ಗ್ರಹಿಕೆಯನ್ನು ಬದಲಾಯಿಸಬೇಕಿದ್ದು, ಅದನ್ನು ಮಾಡಲು ಸಾಧ್ಯ ಎಂದು ದೃಢವಾಗಿ ನಂಬುವವರಲ್ಲಿ ನಾನೂ ಒಬ್ಬಳು. ಸುಸ್ಥಿರ ಬದಲಾವಣೆಯನ್ನು ಖಾತ್ರಿಪಡಿಸಲು ನಾವು ಬಯಸಿದ್ದೇ ಆದರೆ, ಸರ್ಕಾರದೊಂದಿಗೆ ಕೈಜೋಡಿಸುವುದೊಂದೇ ನಮಗಿರುವ ದಾರಿ.

---

**ಬೃಂದಾ** ಅವರು ಕಿವುಡು ಮಕ್ಕಳ ಪ್ರತಿಷ್ಠಾನ 'ವಾಣಿ'ಯ ಸ್ಥಾಪಕ ಟ್ರಸ್ಟಿಯಾಗಿದ್ದಾರೆ. ಇವರು ವಿಶೇಷ ಶಿಕ್ಷಕರಾಗಿ ಹಾಗೂ ಓರ್ವ ಅನುಭವಸ್ಥ ವಿಕಾಸತಜ್ಞ ವೃತ್ತಿಪರರಾಗಿ ತರಬೇತಿ ಪಡೆದಿದ್ದಾರೆ. ಯು.ಕೆ.ಯ ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯದಿಂದ 'ವಿಶೇಷ ಶಿಕ್ಷಣ'ದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಇವರು, ತಮ್ಮ ಇಡೀ ವೃತ್ತಿ ಜೀವನದ ಅಥವಾ 40ಕ್ಕೂ ಹೆಚ್ಚಿನ ವರ್ಷಗಳು 'ವಿಶೇಷ ಅಗತ್ಯವುಳ್ಳ ಮಕ್ಕಳ' ಹಕ್ಕು ಹಾಗೂ ಬೆಳವಣಿಗೆಗಾಗಿ ಉತ್ಕಟವಾಗಿ ಹೋರಾಟ ನಡೆಸಿಕೊಂಡು ಬಂದಿದ್ದಾರೆ. ಇವರು ADB (ವಿಯೆಟ್ನಾಮ್ ಮತ್ತು ಕಾಂಬೋಡಿಯಾ), IFC ಮತ್ತು ವಿಶ್ವಬ್ಯಾಂಕ್, ಬ್ರಿಟಿಷ್ ಕೌನ್ಸಿಲ್, ಚೆಶೈರ್ ಇಂಟರ್ ನ್ಯಾಷನಲ್, ಹ್ಯಾಂಡಿಕ್ಯಾಪ್ ಇಂಟರ್ ನ್ಯಾಷನಲ್, ಸೇವ್ ದ ಚಿಲ್ಡ್ರನ್ ಹಾಗೂ ಇಂಡಿಯನ್ ಸೆರಿಬ್ರಲ್ ಪಾಲ್ಸಿಯಂತಹ ಸಂಸ್ಥೆಗಳೂ ಒಳಗೊಂಡಂತೆ ಹಲವು ಅಂತಾರಾಷ್ಟ್ರೀಯ ಹಾಗೂ ದ್ವಿಪಕ್ಷೀಯ ಸೇವಾಸಂಸ್ಥೆಗಳಲ್ಲಿ ಹಾಗೂ ಸರ್ಕಾರೇತರ ಸಂಸ್ಥೆಗಳಲ್ಲಿ ಸೇವೆಸಲ್ಲಿಸಿದ್ದಾರೆ. ಇವರ ಕೆಲಸದ ದೃಷ್ಟಿಕೋನ ಮತ್ತು ವಿಧಾನವು ಮಾನವರ ಸಮಾನತೆಯ ಹಕ್ಕಿಗಾಗಿ ಗಾಢ ಬದ್ಧತೆ ಹೊಂದಿರುವ ತತ್ತ್ವದ ಮೇಲೆ ಆಧಾರಿತವಾಗಿದೆ. ಇವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: bcrishna@vaani.in

● ಅನುವಾದಕರು: **ಕುಶಾಲ್ ಬಿ ಎಸ್** | ಪರಿಶೀಲಕರು: **ಕಲ್ಪನಾ ಚಕ್ರವರ್ತಿ**